ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 22ನೇ ಸೆಪ್ಟಂಬರ್, 2020

ಬಜೆಡ್ಯಾಂನಲ್ಲಿ ಹೊಳೆತ್ತಿ ಸಂಗ್ರಹಿಸಿದ ಮಣ್ಣನ್ನು ಅಕ್ರಮವಾಗಿ ಹೊರಸಾಗಿಸಿರುವ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು):-

188 (206) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ ಮೂರು ವರ್ಷಗಳಲ್ಲಿ ಕುಡಿಯುವ ನೀರಿನ ಉದ್ದೇಶಕ್ಕಾಗಿ ಉಡುಪಿ ಜಿಲ್ಲೆಯ ಸೀತಾನದಿ ಎಣ್ಣೆಹೊಳೆ, ಸ್ವರ್ಣನದಿ ಮತ್ತು ಬಜೆಡ್ಯಾಂನಿಂದ ಹೂಳನ್ನು ಎತ್ತಲು ಟೆಂಡರ್‌ನ್ನು ಕರೆಯಲಾಗಿರುತ್ತದೆಯೇ ; ಈ ಟೆಂಡರ್‌ನ್ನು ಪಡೆದ ಸಂಸ್ಥೆಗಳು ಯಾವುವು ; (ವರ್ಷವಾರು, ಟೆಂಡರ್‌ವಾರು ಮಾಹಿತಿಯನ್ನು ಒದಗಿಸುವುದು) ಈ ಟೆಂಡರ್‌ನ ಷರತ್ತುಗಳು ಯಾವುವು ; (ಕರಾರು ಪತ್ರದ ಪ್ರತಿಯನ್ನು ಒದಗಿಸುವುದು)

(ಆ) ಕಳೆದ ಮೂರು ವರ್ಷಗಳಲ್ಲಿ ಕುಡಿಯುವ ನೀರಿನ ಉದ್ದೇಶಕ್ಕಾಗಿ ಉಡುಪಿ ಜಿಲ್ಲೆಯ ಸೀತಾನದಿ ಎಣ್ಣೆಹೊಳೆ, ಸ್ವರ್ಣನದಿ ಮತ್ತು ಬಜೆಡ್ಯಾಂನಿಂದ ಹೂಳನ್ನು ಎತ್ತಲು ಟೆಂಡರ್ ಪಡೆದ ಸಂಸ್ಥೆಗಳು ಹೂಳೆತ್ತಿದ ಮರಳಿನ ಪ್ರಮಾಣವೆಷ್ಟು ; ಈ ಹೂಳನ್ನು ಎತ್ತಲು ತಗಲುವ ಅಂದಾಜು ವೆಚ್ಚವೆಷ್ಟು ; ಅವುಗಳ ಪಾರದರ್ಶಕ ಮತ್ತು ಸಮರ್ಪಕ ವಿಲೇವಾರಿಗೆ ಇಲಾಖೆಯಿಂದ ವಹಿಸಲಾದ ಕ್ರಮಗಳೇನು ; (ಯಾವ ಯಾವ ಉದ್ದೇಶಗಳಿಗೆ ಈ ಮರಳನ್ನು ಬಳಸಲಾಗಿರುತ್ತದೆ)

(ಇ) ಹಂಚಿಕೆ ಮಾಡಲಾದ ಮರಳಿನ ಪ್ರಮಾಣವೆಷ್ಟು ; ಮರಳಿನ ಮಾರಾಟದಿಂದ ಸರ್ಕಾರಕ್ಕೆ ದೊರೆತ ಆದಾಯವೆಷ್ಟು ; (ವರ್ಷವಾರು, ಮರಳಿನ ಸಂಗ್ರಹ, ಹಂಚಿಕೆವಾರು, ಹೂಳೆತ್ತಲು ತಗುಲಿದ ವೆಚ್ಚ ಮತ್ತು ಆದಾಯದ ವಿವರ ನೀಡುವುದು)

(ಈ) ಈ ಸಾಲಿನಲ್ಲಿ ಸಂಗ್ರಹಿಸಲಾದ ಮರಳನ್ನು ಅಕ್ರಮವಾಗಿ ಸಾಗಿಸಲಾಗಿದ್ದು ಇದರಲ್ಲಿ ಹಿರಿಯ ಅಧಿಕಾರಿಗಳು ಶಾಮೀಲಾಗಿರುವ ಬಗ್ಗೆ ಪತ್ರಿಕೆಯಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಜಿಲ್ಲೆಯಲ್ಲಿ ಲಕ್ಷಾಂತರ ರೂ. ಮೌಲ್ಯದ ಮರಳು ಅಕ್ರಮವಾಗಿ ಸಾಗಾಟವಾಗುತ್ತಿದ್ದರೂ ಯಾವುದೇ ಕ್ರಮವಹಿಸದ ಅಧಿಕಾರಿಗಳ ವಿರುದ್ಧ ಕ್ರಮವನ್ನು ವಹಿಸಲಾಗಿದೆಯೇ ; ಇಲ್ಲವಾದರೆ ಕಾರಣವೇನು ; ಇಲಾಖೆಯಿಂದ ಈ ಬಗ್ಗೆ ಪ್ರಕರಣ ದಾಖಲಿಸಲಾಗಿದೆಯೇ ; ಹಾಗಿದ್ದಲ್ಲಿ ಎಷ್ಟು ಪ್ರಕರಣವನ್ನು ದಾಖಲಿಸಲಾಗಿದೆ ? (FIR ಪ್ರತಿಯನ್ನು ಒದಗಿಸುವುದು)